## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1566 |
| ಸದಸ್ಯರ ಹೆಸರು | : | ಶ್ರೀ ವಿಜಯಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 24.09.2021 |
| ಉತ್ತರಿಸುವ ಸಚಿವರು | : | ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಕಲ್ಯಾಣ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಗೆ ಕೇವಲ ಅಧ್ಯಕ್ಷರನ್ನು ಮಾತ್ರ ನೇಮಿಸಿ, ಪೂರ್ಣ ಪ್ರಮಾಣದ ಆಡಳಿತ ಮಂಡಳಿ ರಚಿಸದಿರುವುದು ಸರ್ಕಾರದ ಗಮನಕ್ಕೆ ಇದೆಯೇ; ಹಾಗಿದ್ದಲ್ಲಿ ಪೂರ್ಣ ಪ್ರಮಾಣದ ಆಡಳಿತ ಮಂಡಳಿ ಯಾವಾಗ ರಚನೆ ಮಾಡಲಾಗುವುದು; | -ಹೌದು-<br>ಕಲ್ಯಾಣ (ಹಿಂದಿನ ಹೈದ್ರಾಬಾದ) ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಯು ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಆರ್:ಪಿಎಲ್ಎಕ್ಸ್:2012, ದಿನಾಂಕ: 06.11.2013ರನ್ವಯ ರಚನೆಯಾಗಿದ್ದು, 2013 ರಿಂದ ಪ್ರಾರಂಭವಾಗಿದೆ.<br>ಮಂಡಳಿಯ ಆಡಳಿತ ಮಂಡಳಿಗೆ ಒಬ್ಬರು ಅಧ್ಯಕ್ಷರು, ಎಂಟು ಜನ ವಿಧಾನ ಸಭೆಯ ಸದಸ್ಯರು, ಇಬ್ಬರು ವಿಧಾನ ಪರಿಷತ್ ಸದಸ್ಯರು, ಒಬ್ಬರು ಸಂಸತ್ತಿನ ಸದಸ್ಯರು, ಒಬ್ಬರು ಜಿಲ್ಲಾ ಪಂಚಾಯತ ಅಧ್ಯಕ್ಷರು, ಒಬ್ಬರು ಸ್ಥಳೀಯ ಸಂಸ್ಥೆಯ ಅಧ್ಯಕ್ಷ/ಮೇಯರ್ ಮತ್ತು ಐದು ಜನ ತಜ್ಞರನ್ನು ಒಳಗೊಂಡಿರುತ್ತದೆ.<br>ಮಂಡಲಿಗೆ ಒಬ್ಬರು ಅಧ್ಯಕ್ಷರು ಹಾಗೂ ಒಬ್ಬರು ಸದಸ್ಯರನ್ನು ನೇಮಕ ಮಾಡಲಾಗಿದೆ.<br>ಶ್ರೀಘದಲ್ಲೇ ಉಳಿದ-16 ಸದಸ್ಯರನ್ನು ನೇಮಕ ಮಾಡಲಾಗುತ್ತದೆ. |
| ಆ | ಕಲ್ಯಾಣ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಗೆ ಪೂರ್ಣ ಪ್ರಮಾಣದ ಆಡಳಿತ ಮಂಡಳಿ ರಚಿಸದಿರುವುದರಿಂದ ಮಂಡಳಿಯ ಅಭಿವೃದ್ಧಿ ಕಾರ್ಯಗಳು ಕುಂಠಿತಗೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಇದೆಯೇ; ಹಾಗಿದ್ದಲ್ಲಿ, ಪೂರ್ಣ ಪ್ರಮಾಣದ ಆಡಳಿತ ಮಂಡಳಿ ರಚಿಸಲು ಸರ್ಕಾರಕ್ಕೆ ಇರುವ ತೊಂದರೆಗಳೇನು; | -ಇಲ್ಲ-<br>ಮಂಡಳಿಯ ಮೈಕ್ರೋ/ಮ್ಯಾಕ್ರೋ ಕ್ರಿಯಾಯೋಜನೆಯನ್ನು ಜಿಲ್ಲಾ ಉಸ್ತುವಾರಿ ಸಮಿತಿ ಮೂಲಕ ಮಾಡಲಾಗುತ್ತಿದ್ದು ಶೇಕಡ 84ರಷ್ಟು ಅನುದಾನಕ್ಕೆ ಸಂಬಂಧಿಸಿರುತ್ತದೆ. ಉಳಿದ ಶೇಕಡ 16ರಷ್ಟು ಅನುದಾನದಲ್ಲಿ ಮಾನ್ಯ ಮುಖ್ಯಮಂತ್ರಿಗಳ ವಿವೇಚನಾ ನಿಧಿ(CMDQ)ಗೆ ಶೇಕಡ 2ರಷ್ಟು, ಸರ್ಕಾರದ ವಿವೇಚನಾ ನಿಧಿ(GDQ)ಗೆ ಶೇಕಡ 5ರಷ್ಟು, ಅಧ್ಯಕ್ಷರ ವಿವೇಚನಾ ನಿಧಿ(CDQ)ಗೆ ಶೇಕಡ 3ರಷ್ಟು, ಪ್ರಾದೇಶಿಕ ನಿಧಿ(RF)ಗೆ ಶೇಕಡ 5ರಷ್ಟು ಮತ್ತು ಮಂಡಳಿಯ ಆಡಳಿತ ವೆಚ್ಚಕ್ಕೆ ಶೇಕಡ 1ರಷ್ಟು ಅನುದಾನ ಹಂಚಿಕೆ ಮಾಡಿ ಮಂಡಳಿಯ ಮಟ್ಟದಲ್ಲಿ ರೂ.119489.43 ಲಕ್ಷಗಳ ಅನುದಾನಕ್ಕೆ ಈಗಾಗಲೇ ಕ್ರಿಯಾಯೋಜನೆ ತಯಾರಿಸಲಾಗಿದೆ.<br>ಕಾಮಗಾರಿಗಳ ಅನುಷ್ಠಾನವನ್ನು ವಿವಿಧ ಏಜೆನ್ಸಿಗಳು, ಜಿಲ್ಲಾಧಿಕಾರಿಗಳ ಹಂತದಲ್ಲಿ ಅನುಷ್ಠಾನ ಮಾಡುವುದರಿಂದ ಕಾಮಗಾರಿಗಳ ಪ್ರಗತಿ ಕುಂಠಿತವಾಗಿರುವುದಿಲ್ಲ.<br>ಪೂರ್ಣ ಪ್ರಮಾಣದ ಆಡಳಿತ ಮಂಡಳಿಯನ್ನು ಸದ್ಯದಲ್ಲಿ ರಚಿಸಲಾಗುತ್ತದೆ. |

ಸಂಖ್ಯೆ: ಪಿಡಿಎಸ್ 99 ಹೆಚ್ ಕೆಡಿ 2021

(ಮುನಿರತ್ನ)
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.